## ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1301

ಸದಸ್ಯರ ಹೆಸರು : ಶ್ರೀ ಆರ್. ಬಿ.ತಿಮ್ಮಾಪೂರ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 23-09-2021

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ಜಿಲ್ಲಾ ಮಟ್ಟದ ಪತ್ರಿಕೆಗಳಿಗೆ ನೀಡುತ್ತಿರುವ ಜಾಹೀರಾತುಗಳಿಗೆ ಅನುಸರಿಸುತ್ತಿರುವ ಮಾನದಂಡವೇನು ; | ಸರ್ಕಾರದ ಆದೇಶ ಸಂ: ಕಸಂವಾಪ್ರ 69 ವಾಪ್ರಜಾ 2013 ದಿನಾಂಕ 10-09-2014 ರಲ್ಲಿ ಸರ್ಕಾರವು ಜಾರಿಗೆ ತಂದಿರುವ "ಜಾಹೀರಾತು ನೀತಿ-2013 - ಅನುಷ್ಠಾನ ನಿಯಮಗಳು - 2014" ರಲ್ಲಿನ ಕಂಡಿಕೆ 23ರಲ್ಲಿ ನಿಗದಿಪಡಿಸಿರುವಂತೆ, ರಾಜ್ಯ ಮಟ್ಟದ ವಿಶೇಷ ಸಭೆ ಸಮಾರಂಭಗಳು, ಜಯಂತಿ ಆಚರಣೆಗಳು ಸರ್ಕಾರದ ವಾರ್ಷಿಕ ದಿನಾಚರಣೆ, ಪ್ರಮುಖ ಯೋಜನೆಗಳ ಲೋಕಾರ್ಪಣೆ ಇತ್ಯಾದಿ ಜಾಹೀರಾತುಗಳನ್ನು ಮಾಧ್ಯಮಪಟ್ಟಿಯಲ್ಲಿರುವ ರಾಜ್ಯ ಮಟ್ಟದ ದಿನಪತ್ರಿಕೆಗಳಿಗೆ ಹಾಗೂ 20000 ಮತ್ತು ಹೆಚ್ಚು ಪ್ರತಿಗಳ ಪ್ರಸಾರ ಸಂಖ್ಯೆ ಹೊಂದಿರುವ ಪ್ರಾದೇಶಿಕ ದಿನ ಪತ್ರಿಕೆಗಳಿಗೆ ಆವರ್ತನೀಯ ವಿಧಾನವನ್ನು ಅನುಸರಿಸಿ ಬಿಡುಗಡೆ ಮಾಡಬೇಕು. ಈ ಕಾರ್ಯಕ್ರಮಗಳು ಜರುಗುವ ವ್ಯಾಪ್ತಿಯಲ್ಲಿನ ಪ್ರಾದೇಶಿಕ ಮತ್ತು ಜಿಲ್ಲಾ ಮಟ್ಟದ ಪತ್ರಿಕೆಗಳಿಗೆ ಸಹ ಸಂದರ್ಭಾನುಸಾರ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಆಯುಕ್ತರು ಜಾಹೀರಾತು ಬಿಡುಗಡೆ ಮಾಡಲು ಅಧಿಕಾರ ಹೊಂದಿರುತ್ತಾರೆ. ಸದರಿ ಮಾನದಂಡಗಳನ್ವಯ ರಾಜ್ಯ ಮತ್ತು ಜಿಲ್ಲಾ ಮಟ್ಟದ ಪತ್ರಿಕೆಗಳಿಗೆ ಜಾಹೀರಾತುಗಳನ್ನು ಬಿಡುಗಡೆ ಮಾಡಲಾಗುತ್ತದೆ. ಜಾಹೀರಾತು ಬಿಡುಗಡೆಯಲ್ಲಿ ಯಾವುದೇ ಅನುಪಾತ (Ratio) ಅನುಸರಿಸುವುದಿಲ್ಲ. |
| ಆ | ರಾಜ್ಯ ಮತ್ತು ಜಿಲ್ಲಾ ಮಟ್ಟದ ಪತ್ರಿಕೆಗಳಿಗೆ ನೀಡುವ ಜಾಹೀರಾತಿನ ಅನುಪಾತ (Ratio) ಕ್ಕೆ ಅನುಸರಿಸಿದ ಮಾನದಂಡ ಯಾವುದು; | |
| ಇ | ನಿರ್ದಿಷ್ಟ ಸರ್ಕಾರಿ ಜಾಹೀರಾತುಗಳನ್ನು ಕೇವಲ ರಾಜ್ಯಮಟ್ಟದ ಪತ್ರಿಕೆಗಳಿಗೆ ಮೀಸಲುಗೊಳಿಸಲು ಅನುಸರಿಸುವ ಮಾನದಂಡ ಯಾವುದು ; | ಸರ್ಕಾರದ ಆದೇಶ ಸಂ: ಕಸಂವಾಪ್ರ 69 ವಾಪ್ರಜಾ 2013 ದಿನಾಂಕ 10-09-2014 ರಲ್ಲಿ ಸರ್ಕಾರವು ಜಾರಿಗೆ ತಂದಿರುವ "ಜಾಹೀರಾತು ನೀತಿ-2013 - ಅನುಷ್ಠಾನ ನಿಯಮಗಳು - 2014" ರಲ್ಲಿನ ಕಂಡಿಕೆ 23 ರಲ್ಲಿ ನಿಗದಿಪಡಿಸಿರುವಂತೆ, ರಾಜ್ಯ ಮಟ್ಟದ ವಿಶೇಷ ಸಭೆ ಸಮಾರಂಭಗಳು, ಜಯಂತಿ ಆಚರಣೆಗಳು ಸರ್ಕಾರದ ವಾರ್ಷಿಕ ದಿನಾಚರಣೆ, ಪ್ರಮುಖ |
| ಈ | ಇದನ್ನು ಜಾಹೀರಾತು ನೀತಿಯ ಯಾವ ನಿರ್ದಿಷ್ಟ "Clause" ಅನ್ವಯ ಎಂದು ನಿರ್ಧರಿಸಲಾಗುತ್ತದೆ? | |

| | | |
|---|---|---|
| | | ಯೋಜನೆಗಳ ಲೋಕಾರ್ಪಣೆ ಇತ್ಯಾದಿ ಜಾಹೀರಾತುಗಳನ್ನು ಮಾಧ್ಯಮಪಟ್ಟಿಯಲ್ಲಿರುವ ರಾಜ್ಯ ಮಟ್ಟದ ದಿನಪತ್ರಿಕೆಗಳಿಗೆ ಬಿಡುಗಡೆ ಮಾಡಲಾಗುತ್ತದೆ. |

ಕೆಸಿಐ-ಪಿಐಪಿ/263/2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ